CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಜುಲೈ ೮, ೨೦೦೪ (ಆಷಾಢ ೧೭, ಶಕ ವರ್ಷ ೧೯೨೬) | ಸಂಚಿಕೆ ೨೮ |
|---|---|---|

## ಭಾಗ - ೪ -ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 135 ಸಆಸೇ 2004, ಬೆಂಗಳೂರು, ದಿನಾಂಕ: 28ನೇ ಮೇ, 2004**

ಹಿಂದಿನ ಮುಖ್ಯಮಂತ್ರಿಯವರ ಕಛೇರಿಯಲ್ಲಿ: ಸಂಪುಟ ಸಚಿವರುಗಳ: ರಾಜ್ಯ ಸಚಿವರುಗಳ ಆಪ್ತ ಶಾಖೆಯಲ್ಲಿ ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿರುವ ಕೆಳಕಂಡ ಅಧಿಕಾರಿಗಳ ಸೇವೆಯನ್ನು ಈ ಕೂಡಲೇ ಜಾರಿಗೆ ಬರುವಂತೆ ಅವರುಗಳ ಹೆಸರುಗಳ ಮುಂದೆ ಸೂಚಿಸಿರುವ ಅವರುಗಳ ಮಾತೃ ಇಲಾಖೆಗೆ ಹಿಂದಿರುಗಿಸಲಾಗಿದೆ; ಹಾಗೂ ಗುತ್ತಿಗೆ ಆಧಾರದ ಮೇಲೆ ನೇಮಿಸಿರುವ ಅಧಿಕಾರಿಗಳ ಗುತ್ತಿಗೆ ಆಧಾರದ ನೇಮಕಾತಿಯನ್ನು ಸಂಬಂಧಪಟ್ಟ ಸಚಿವರ ಅಧಿಕಾರ ಮುಗಿದ ತಕ್ಷಣದಿಂದ ಜಾರಿಗೆ ಬರುವಂತೆ ಕೊನೆಗೊಳಿಸಲಾಗಿದೆ.

ಈ ಅಧಿಕಾರಿಗಳು ಕರ್ತವ್ಯದಿಂದ ಬಿಡುಗಡೆ ಹೊಂದುವ ಮೊದಲು ದಿನಾಂಕ: 16.11.1988ರ ಸರ್ಕಾರದ ಆದೇಶ ಕ್ರಮಾಂಕ ಸಿಆಸುಇ 151 ಸಆಸೇ 88 ಸೂಚನೆಯನ್ನೊಳಗೊಂಡಂತೆ ಸಚಿವರುಗಳ ಕಛೇರಿ: ಗೃಹ ಕಛೇರಿ ಹಾಗೂ ಸಚಿವರುಗಳ ಗೃಹಗಳಿಗೆ ಸರ್ಕಾರದಿಂದ ಒದಗಿಸಲಾಗಿರುವ ಕಛೇರಿ ಉಪಕರಣಗಳು ಹಾಗೂ ಇತರೆ ಗೃಹ ಬಳಕೆ ಉಪಕರಣಗಳು, ಪೀಠೋಪಕರಣಗಳ ಪಟ್ಟಿಯನ್ನು ಆಯಾ ಪ್ರಾಧಿಕಾರಕ್ಕೆ ಸಲ್ಲಿಸಿ ಅವರಿಂದ ದೃಢೀಕರಣ ಪತ್ರ ಪಡೆದು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಗೆ ಸಲ್ಲಿಸಿ ನಂತರ ಬಿಡುಗಡೆ ಹೊಂದಲು ಸೂಚಿಸಲಾಗಿದೆ.

ಭಾಗ-1

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಮತ್ತು ಪದನಾಮ<br>ಶ್ರೀಯುತರು | ಮಾತೃ ಇಲಾಖೆ |
|---|---|---|
| 1. | ಎನ್. ಭೃಂಗೀಶ್, ಉಪ ನಿರ್ದೇಶಕರು<br>ವಾರ್ತಾ ಮತ್ತು ಪ್ರಚಾರ ಇಲಾಖೆ, ನಿಯೋಜನೆ ಮೇಲೆ<br>ಮುಖ್ಯಮಂತ್ರಿಯವರ ಹಿರಿಯ ವಾರ್ತಾಧಿಕಾರಿ. | ವಾರ್ತಾ ಮತ್ತು ಪ್ರಚಾರ ಇಲಾಖೆ |
| 2. | ಹೆಚ್.ಆರ್. ಕೇಶವಮೂರ್ತಿ, ಸಹಾಯಕ ನಿರ್ದೇಶಕರು, ಪದವಿಪೂರ್ವ ಶಿಕ್ಷಣ ಇಲಾಖೆ ನಿಯೋಜನೆ ಮೇಲೆ ಮಾನ್ಯ ಮುಖ್ಯಮಂತ್ರಿಯವರ ವಿಶೇಷಾಧಿಕಾರಿ. | ಪದವಿ ಪೂರ್ವ ಶಿಕ್ಷಣ ಇಲಾಖೆ |
| 3. | ಕೆ. ಶ್ರೀನಿವಾಸಲು, ಹಿರಿಯ ಸಹಾಯಕ ನಿರ್ದೇಶಕರು, ನಿಯೋಜನೆ ಮೇಲೆ ಮಾನ್ಯ ಗ್ರಾಮೀಣ ನೀರು ಸರಬರಾಜು ರಾಜ್ಯ ಸಚಿವರ ಆಪ್ತ ಕಾರ್ಯದರ್ಶಿ. | ಡಿ.ಎಸ್.ಇ.ಆರ್.ಟಿ. |

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಮತ್ತು ಪದನಾಮ<br>ಶ್ರೀಯುತರು | ಮಾತೃ ಇಲಾಖೆ |
|---|---|---|
| 4. | ಕೆ. ವಿಶ್ವನಾಥರೆಡ್ಡಿ, ಜಂಟಿ ನಿರ್ದೇಶಕರು, ಭೂಮಾಪನ ಮತ್ತು ಭೂದಾಖಲೆಗಳ ಇಲಾಖೆ ನಿಯೋಜನೆ ಮೇಲೆ ಮಾನ್ಯ ನಗರಾಭಿವೃದ್ಧಿ ಸಚಿವರ ಆಪ್ತ ಕಾರ್ಯದರ್ಶಿ | ಭೂಮಾಪನ ಮತ್ತು ಭೂದಾಖಲೆಗಳ ಇಲಾಖೆ |
| 5. | ಆರ್. ರಾಮಪ್ರಿಯ, ಜಂಟಿ ನಿರ್ದೇಶಕರು, ಸಾಂಖ್ಯಿಕ ನಿರ್ದೇಶನಾಲಯ, ನಿಯೋಜನೆ ಮೇಲೆ ಮಾನ್ಯ ಕಾನೂನು, ಸಂಸದೀಯ ವ್ಯವಹಾರಗಳ ಸಚಿವರ ಆಪ್ತ ಕಾರ್ಯದರ್ಶಿ | ಸಾಂಖ್ಯಿಕ ನಿರ್ದೇಶನಾಲಯ |
| 6. | ಎಂ. ರಾಮಯ್ಯ, ಉಪ ನಿರ್ದೇಶಕರು<br>ಹಿಂದುಳಿದ ವರ್ಗಗಳ ಇಲಾಖೆ ನಿಯೋಜನೆ ಮೇಲೆ ಮಾನ್ಯ ರೇಷ್ಮೆ ಮತ್ತು ಜವಳಿ ಸಚಿವರ ಆಪ್ತ ಕಾರ್ಯದರ್ಶಿ | ಹಿಂದುಳಿದ ವರ್ಗಗಳ ಇಲಾಖೆ |
| 7. | ಆರ್.ಎಂ. ನಟರಾಜ್,<br>ಸಹಕಾರ ಸಂಘಗಳ ಜಂಟಿ ನಿಬಂಧಕರು ನಿಯೋಜನೆ ಮೇಲೆ ಮಾನ್ಯ ಯುವಜನ ಸೇವೆ ಮತ್ತು ಕ್ರೀಡಾ ರಾಜ್ಯ ಸಚಿವರ ಆಪ್ತ ಕಾರ್ಯದರ್ಶಿ. | ಸಹಕಾರ ಇಲಾಖೆ |
| 8. | ಜಿ.ಬಿ. ದೇವಾನಂದ್, ಆಂಗ್ಲ ಭಾಷಾ ಉಪನ್ಯಾಸಕರು ಶಿಕ್ಷಣ ಇಲಾಖೆ, ನಿಯೋಜನೆ ಮೇಲೆ ಮಾನ್ಯ ಮುಜರಾಯಿ ರಾಜ್ಯ ಸಚಿವರ ಆಪ್ತ ಕಾರ್ಯದರ್ಶಿ. | ಶಿಕ್ಷಣ ಇಲಾಖೆ |
| 9. | ಬಿ.ಟಿ. ಚಾಮರಾಜನ್, ಸಹಕಾರ ಸಂಘಗಳ ಜಂಟಿ ನಿಬಂಧಕರು, ನಿಯೋಜನೆ ಮೇಲೆ ಮಾನ್ಯ ಆಹಾರ ಮತ್ತು ನಾಗರೀಕ ಸರಬರಾಜು ರಾಜ್ಯ ಸಚಿವರ ಆಪ್ತ ಕಾರ್ಯದರ್ಶಿ | ಸಹಕಾರ ಇಲಾಖೆ |
| 10. | ಬೆಳ್ಳಶೆಟ್ಟಿ, ಹಿರಿಯ ಸಹಾಯಕ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ನಿಯೋಜನೆ ಮೇಲೆ ಮಾನ್ಯ ವಯಸ್ಕರ ಶಿಕ್ಷಣ, ಗ್ರಂಥಾಲಯ ಹಾಗೂ ಮುದ್ರಣ ಮತ್ತು ಲೇಖನ ಸಾಮಗ್ರಿ ರಾಜ್ಯ ಸಚಿವರ ಆಪ್ತ ಕಾರ್ಯದರ್ಶಿ | ಸಾರ್ವಜನಿಕ ಶಿಕ್ಷಣ ಇಲಾಖೆ |
| 11. | ಸಿ. ಅಶ್ವತ್ಥನಾರಾಯಣ,<br>ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಉಪ ನಿರ್ದೇಶಕರು, ನಿಯೋಜನೆ ಮೇಲೆ ಮಾನ್ಯ ಸಹಕಾರ ರಾಜ್ಯ ಸಚಿವರ ಆಪ್ತ ಕಾರ್ಯದರ್ಶಿ | ಸಹಕಾರ ಇಲಾಖೆ |
| 12. | ಜಿ.ಎಲ್. ರಾಜೇಗೌಡ, ಸಹಾಯಕ ಕಾರ್ಯಪಾಲಕ ಅಭಿಯಂತರರು, ನಿಯೋಜನೆ ಮೇಲೆ ಮಾನ್ಯ ಪಶುಸಂಗೋಪನೆ ಮತ್ತು ಸಕ್ಕರೆ ಸಚಿವರ ಆಪ್ತಕಾರ್ಯದರ್ಶಿ | ಲೋಕೋಪಯೋಗಿ ಇಲಾಖೆ |
| 13. | ಎಸ್.ವೈ. ಕುಳಗೇರಿ,<br>ಅಧೀನ ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆ ಸಚಿವಾಲಯ ನಿಯೋಜನೆ ಮೇಲೆ ಮಾನ್ಯ ಅರಣ್ಯ ರಾಜ್ಯ ಸಚಿವರ ಆಪ್ತ ಕಾರ್ಯದರ್ಶಿ. | ಕರ್ನಾಟಕ ವಿಧಾನ ಸಭೆ ಸಚಿವಾಲಯ |
| 14. | ಜಯತೀರ್ಥ ಪಿ. ಗಲಗಲಿ,<br>ಸರ್ಕಾರದ ಉಪ ಕಾರ್ಯದರ್ಶಿ ಸ್ವತಂತ್ರ ಪ್ರಭಾರ, ಕರ್ನಾಟಕ ವಿಧಾನ ಸಭೆ, ನಿಯೋಜನೆ ಮೇಲೆ ಮಾನ್ಯ ಯೋಜನೆ ಸಾಂಸ್ಥಿಕ ಹಣಕಾಸು ಮತ್ತು ಸಾಂಖ್ಯಿಕ ಸಚಿವರ ಆಪ್ತ ಕಾರ್ಯದರ್ಶಿ. | ಕರ್ನಾಟಕ ವಿಧಾನ ಸಭೆ ಸಚಿವಾಲಯ |
| | **ಭಾಗ-2** | |
| 15. | ಬಿ.ಎಸ್. ಶ್ರೀಧರ್,<br>ಡೆಪ್ಯುಟಿ ಮ್ಯಾನೇಜರ್, ದ. ಮೈಸೂರು ಪೇಪರ್ ಮಿಲ್ಸ್ ಲಿಮಿಟೆಡ್ ಬೆಂಗಳೂರು, ಗುತ್ತಿಗೆ ಆಧಾರದ ಮೇಲೆ ಮಾನ್ಯ ಮುಖ್ಯಮಂತ್ರಿಯವರ ವಿಶೇಷಾಧಿಕಾರಿ | ದ. ಮೈಸೂರು ಪೇಪರ್ ಮಿಲ್ಸ್ ಲಿಮಿಟೆಡ್ ಬೆಂಗಳೂರು. |
| 16. | ಡಾ: ಮಹದೇವ್,<br>ಆಂಗ್ಲ ಭಾಷಾ ಪ್ರಾಧ್ಯಾಪಕರು, ಮೈಸೂರು ವಿಶ್ವ ವಿದ್ಯಾಲಯ ಗುತ್ತಿಗೆ ಆಧಾರದ ಮೇಲೆ ಮಾನ್ಯ ಮುಖ್ಯ ಮಂತ್ರಿಯವರ ವಿಶೇಷಾಧಿಕಾರಿ. | ಮೈಸೂರು ವಿಶ್ವ ವಿದ್ಯಾಲಯ. |

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಮತ್ತು ಪದನಾಮ **ಶ್ರೀಯುತರು** | ಮಾತೃ ಇಲಾಖೆ |
|---|---|---|
| 17. | ಡಾ: ಎ.ಆರ್. ಮಂಜುನಾಥ್, ಸಾರ್ವಜನಿಕ ಸಂಪರ್ಕಾಧಿಕಾರಿ, ಕನ್ನಡ ವಿಶ್ವವಿದ್ಯಾಲಯ ಹಂಪಿ, ಗುತ್ತಿಗೆ ಆಧಾರದ ಮೇಲೆ ಕನ್ನಡ ಮತ್ತು ಸಂಸ್ಕೃತಿ ರಾಜ್ಯ ಸಚಿವರ ಆಪ್ತ ಕಾರ್ಯದರ್ಶಿ. | ಕನ್ನಡ ವಿಶ್ವ ವಿದ್ಯಾಲಯ ಹಂಪಿ. |
| 18. | ಆರ್. ಅಲ್ಬರ್ಟ್, ಗುತ್ತಿಗೆ ಆಧಾರದ ಮೇಲೆ ಮಾನ್ಯ ಲೋಕೋಪಯೋಗಿ ಸಚಿವರ ಆಪ್ತ ಕಾರ್ಯದರ್ಶಿ | ಸಚಿವರ ಅಧಿಕಾರ ಮುಗಿದ ತಕ್ಷಣ ಜಾರಿಗೆ ಬರುವಂತೆ ಅಧಿಕಾರಿಯವರ ಗುತ್ತಿಗೆ ಅವಧಿಯನ್ನು ಮುಕ್ತಾಯಗೊಳಿಸಲಾಗಿದೆ. |
| 19. | ಡಾ: ಯು.ಪಿ. ಚಂದ್ರಶೇಖರ್, ಉಪ ನಿರ್ದೇಶಕರು, ದೇವರಾಜ್ ಅರಸ್ ಸಂಶೋಧನಾ ಸಂಸ್ಥೆ, ಬೆಂಗಳೂರು, ಒಪ್ಪಂದದ ಆಧಾರದ ಮೇಲೆ ಮಾನ್ಯ ಸಮಾಜ ಕಲ್ಯಾಣ ಸಚಿವರ ವಿಶೇಷ ಕರ್ತವ್ಯಾಧಿಕಾರಿ. | ಸಚಿವರ ಅಧಿಕಾರ ಮುಗಿದ ತಕ್ಷಣ ಜಾರಿಗೆ ಬರುವಂತೆ ಅಧಿಕಾರಿಯವರ ಒಪ್ಪಂದದ ಅವಧಿಯನ್ನು ಮುಕ್ತಾಯಗೊಳಿಸಲಾಗಿದೆ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಪಿ.ಆರ್. 394
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

## ಒಳಾಡಳಿತ ಮತ್ತು ಸಾರಿಗೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಾರಿಇ 19 ಸಾಸಂನಿ 2004, ಬೆಂಗಳೂರು, ದಿನಾಂಕ: 15ನೇ ಜೂನ್, 2004**

ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮದ ನಿಯಮಾವಳಿಗಳು 1961ರ ನಿಯಮ 3ರ ಉಪ ನಿಯಮ (2)ರಂತೆ ಶ್ರೀ ಎಂ. ಮಲ್ಲಿಕಾರ್ಜುನ ಖರ್ಗೆ, ಜಲಸಂಪನ್ಮೂಲ ಹಾಗೂ ಸಾರಿಗೆ ಸಚಿವರು, ಇವರನ್ನು ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ, ಬೆಂಗಳೂರು, ಇದರ ನಿರ್ದೇಶಕರ ಮಂಡಳಿಯ ನಿರ್ದೇಶಕರನ್ನಾಗಿ ಮತ್ತು ರಸ್ತೆ ಸಾರಿಗೆ ನಿಗಮಗಳ ಕಾಯ್ದೆ 1950ರ (ಕೇಂದ್ರದ 1950ರ 64ನೇ ಕಾಯ್ದೆ) ಪ್ರಕರಣ 5ರ ಉಪ ಪ್ರಕರಣ (2)ರಂತೆ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮಕ್ಕೆ ಅಧ್ಯಕ್ಷರನ್ನಾಗಿ ತಕ್ಷಣದಿಂದಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಲಕ್ಷ್ಮೀಕಾಂತ**
ಪಿ.ಆರ್. 399
ಸರ್ಕಾರದ ಅಧೀನ ಕಾರ್ಯದರ್ಶಿ (ಸಾರಿಗೆ),
ಒಳಾಡಳಿತ ಮತ್ತು ಸಾರಿಗೆ ಇಲಾಖೆ.

### ಅಧಿಸೂಚನೆ

**ಸಂಖ್ಯೆ: ಸಾರಿಇ 19 ಸಾಸಂನಿ 2004, ಬೆಂಗಳೂರು, ದಿನಾಂಕ: 15ನೇ ಜೂನ್, 2004**

ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮದ ನಿಯಮಾವಳಿಗಳು 1961ರ ನಿಯಮ 3ರ ಉಪ ನಿಯಮ (2)ರಂತೆ ಶ್ರೀ ಎಂ. ಮಲ್ಲಿಕಾರ್ಜುನ ಖರ್ಗೆ, ಜಲಸಂಪನ್ಮೂಲ ಹಾಗೂ ಸಾರಿಗೆ ಸಚಿವರು, ಇವರನ್ನು ವಾಯುವ್ಯ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ, ಹುಬ್ಬಳಿ, ಇದರ ನಿರ್ದೇಶಕರ ಮಂಡಳಿಯ ನಿರ್ದೇಶಕರನ್ನಾಗಿ ಮತ್ತು ರಸ್ತೆ ಸಾರಿಗೆ ನಿಗಮಗಳ ಕಾಯ್ದೆ 1950ರ (ಕೇಂದ್ರದ 1950ರ 64ನೇ ಕಾಯ್ದೆ) ಪ್ರಕರಣ 5ರ ಉಪ ಪ್ರಕರಣ (2)ರಂತೆ ವಾಯುವ್ಯ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮಕ್ಕೆ ಅಧ್ಯಕ್ಷರನ್ನಾಗಿ ತಕ್ಷಣದಿಂದಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಲಕ್ಷ್ಮೀಕಾಂತ**
ಪಿ.ಆರ್. 400
ಸರ್ಕಾರದ ಅಧೀನ ಕಾರ್ಯದರ್ಶಿ (ಸಾರಿಗೆ),
ಒಳಾಡಳಿತ ಮತ್ತು ಸಾರಿಗೆ ಇಲಾಖೆ.

### ಅಧಿಸೂಚನೆ

**ಸಂಖ್ಯೆ: ಸಾರಿಇ 19 ಸಾಸಂನಿ 2004, ಬೆಂಗಳೂರು, ದಿನಾಂಕ: 15ನೇ ಜೂನ್, 2004**

ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮದ ನಿಯಮಾವಳಿಗಳು 1961ರ ನಿಯಮ 3ರ ಉಪ ನಿಯಮ (2)ರಂತೆ ಶ್ರೀ ಎಂ. ಮಲ್ಲಿಕಾರ್ಜುನ ಖರ್ಗೆ, ಜಲಸಂಪನ್ಮೂಲ ಹಾಗೂ ಸಾರಿಗೆ ಸಚಿವರು, ಇವರನ್ನು ಈಶಾನ್ಯ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ, ಗುಲಬರ್ಗ, ಇದರ ನಿರ್ದೇಶಕರ ಮಂಡಳಿಯ ನಿರ್ದೇಶಕರನ್ನಾಗಿ ಮತ್ತು ರಸ್ತೆ ಸಾರಿಗೆ ನಿಗಮಗಳ ಕಾಯ್ದೆ 1950ರ (ಕೇಂದ್ರದ

1950ರ 64ನೇ ಕಾಯ್ದೆ) ಪ್ರಕರಣ 5ರ ಉಪ ಪ್ರಕರಣ (2)ರಂತೆ ಈಶಾನ್ಯ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮಕ್ಕೆ ಅಧ್ಯಕ್ಷರನ್ನಾಗಿ ತಕ್ಷಣದಿಂದಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಲಕ್ಷ್ಮೀಕಾಂತ**
ಸರ್ಕಾರದ ಅಧೀನ ಕಾರ್ಯದರ್ಶಿ (ಸಾರಿಗೆ),
ಒಳಾಡಳಿತ ಮತ್ತು ಸಾರಿಗೆ ಇಲಾಖೆ.

ಪಿ.ಆರ್. 401

## ಇಂಧನ ಸಚಿವಾಲಯ
## ಅಧಿಸೂಚನೆ
### ಸಂಖ್ಯೆ: ಇಂಇ 47 ಪಿಪಿಸಿ 2004, ಬೆಂಗಳೂರು, ದಿನಾಂಕ: 21ನೇ ಜೂನ್, 2004

ಶ್ರೀ ಕೆ. ಜೋತಿರಾಮಲಿಂಗಂ, ಭಾ.ಆ.ಸೇ. ಹಿಂದಿನ ವ್ಯವಸ್ಥಾಪಕ ನಿರ್ದೇಶಕರು ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಇವರು ಕರ್ನಾಟಕ ವಿದ್ಯುತ್ ನಿಗಮ ನಿಯಮಿತದಿಂದ ವರ್ಗಾವಣೆ ಹೊಂದಿದ ಹಿನ್ನೆಲೆಯಲ್ಲಿ ಶ್ರೀಯುತರ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಹಾಗೂ ವಿಶ್ವೇಶ್ವರಯ್ಯ ವಿದ್ಯುತ್ ನಿಗಮ ನಿಯಮಿತಗಳ ನಿರ್ದೇಶಕ ಮಂಡಳಿಯ ನಿರ್ದೇಶಕತ್ವವನ್ನು ಈ ತತ್‌ಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ. ಇವರ ಬದಲಿಗೆ ಶ್ರೀ ಎಲ್.ವಿ. ನಾಗರಾಜನ್, ಭಾ.ಅ.ಸೇ. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಇವರನ್ನು ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಮೆಮೊರ್ಯಾಂಡಂ ಆಫ್ ಅಸೋಸಿಯೇಷನ್ ಹಾಗೂ ಆರ್ಟಿಕಲ್ಸ್ ಆಫ್ ಅಸೋಸಿಯೇಷನ್‌ನ ಕಲಂ 22(1) ರನ್ವಯ ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ನಿರ್ದೇಶಕ ಮಂಡಳಿಯ ನಿರ್ದೇಶಕರನ್ನಾಗಿ ಹಾಗೂ ವಿಶ್ವೇಶ್ವರಯ್ಯ ವಿದ್ಯುತ್ ನಿಗಮ ನಿಯಮಿತದ ಮೆಮೊರ್ಯಾಂಡಂ ಹಾಗೂ ಆರ್ಟಿಕಲ್ಸ್ ಆಫ್ ಅಸೋಸಿಯೇಷನ್‌ನ ಕಲಂ 30 (i) (ಎ) ರನ್ವಯ ವಿಶ್ವೇಶ್ವರಯ್ಯ ವಿದ್ಯುತ್ ನಿಗಮ ನಿಯಮಿತದ ನಿರ್ದೇಶಕ ಮಂಡಳಿಯ ನಿರ್ದೇಶಕರನ್ನಾಗಿ ಈ ತತ್‌ಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಲ್. ಜಯರಾಂ**
ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

ಪಿ.ಆರ್. 402

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ
### ಅಧಿಸೂಚನೆ ಸಂಖ್ಯೆ: ಕೃತೋಇ 19 ಕೃಇಮಂ 2004, ಬೆಂಗಳೂರು, ದಿನಾಂಕ: 24ನೇ ಜೂನ್, 2004

ಕರ್ನಾಟಕ ಸ್ಟೇಟ್ ಆಗ್ರೋ ಕಾರನ್ ಪ್ರಾಡಕ್ಟ್ಸ್ ಲಿಮಿಟೆಡ್‌ನ ಅಂತರ ನಿಯಮಾವಳಿಯ (ಆರ್ಟಿಕಲ್ಸ್ ಆಫ್ ಅಸೋಸಿಯೇಷನ್) ಅನುಚ್ಛೇದ 5 ಬಿ (i) (ii) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಕಾರ್ಯದರ್ಶಿ (ಆಹಾರ ಸಂಸ್ಕರಣೆ ಮತ್ತು ಕಟಾವು ತಂತ್ರಜ್ಞಾನ), ಕೃಷಿ ಮತ್ತು ತೋಟಗಾರಿಕೆ ಇಲಾಖೆ, ಇವರನ್ನು ಕರ್ನಾಟಕ ಸ್ಟೇಟ್ ಆಗ್ರೋ ಕಾರನ್ ಪ್ರಾಡಕ್ಟ್ಸ್ ಲಿಮಿಟೆಡ್‌ನ ನಿರ್ದೇಶಕ ಮಂಡಳಿಯ ನಿರ್ದೇಶಕರು ಹಾಗೂ ಅಧ್ಯಕ್ಷರನ್ನಾಗಿ ತಕ್ಷಣದಿಂದಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ದೇಸಾಯಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕೃಷಿ ಮತ್ತು ತೋಟಗಾರಿಕೆ ಇಲಾಖೆ.

ಪಿ.ಆರ್. 408

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ
## ಅಧಿಸೂಚನೆ
### ಸಂಖ್ಯೆ: ಆಕುಕ 205 ಎಂಎಸ್‌ಎಫ್ 2004, ಬೆಂಗಳೂರು, ದಿನಾಂಕ: 27ನೇ ಮೇ, 2004

2000ದ ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮದ 3(ಎ) ಮತ್ತು (ಬಿ) ಪ್ರಕರಣದ ಅನುಸಾರ ಪ್ರಕಟಿಸಬೇಕಾದ ವಿವರಗಳು.

ಇಲಾಖೆಯ ಕಾರ್ಯಚಟುವಟಿಕೆ, ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು:

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ (ವೈದ್ಯಕೀಯ ಶಿಕ್ಷಣ) ಕರ್ನಾಟಕ ಸರ್ಕಾರದ ಸಚಿವಾಲಯದ ಇಲಾಖೆಯಾಗಿದ್ದು ಇದು ಬಹುಮಹಡಿಕಟ್ಟಡ ಮೊದಲನೆ ಮಹಡಿಯಲ್ಲಿ ನೆಲೆಗೊಂಡಿದೆ.

1. ಸರ್ಕಾರದ ಕಾರ್ಯದರ್ಶಿ (ವೈದ್ಯಕೀಯ ಶಿಕ್ಷಣ)
2. ಸರ್ಕಾರದ ಉಪ ಕಾರ್ಯದರ್ಶಿ (ವೈದ್ಯಕೀಯ ಶಿಕ್ಷಣ)
3. ಸರ್ಕಾರದ ಅಧೀನ ಕಾರ್ಯದರ್ಶಿ (ವೈದ್ಯಕೀಯ ಶಿಕ್ಷಣ)
4. ಶಾಖಾಧಿಕಾರಿ
5. ಹಿರಿಯ ಸಹಾಯಕ
6. ಸಹಾಯಕರು-2
7. ಕಿರಿಯ ಸಹಾಯಕ
8. ಬೆರಳಚ್ಚುಗಾರ
9. ಜಮೇದರ್

ಇಲಾಖೆಯ ವಿನ್ಯಾಸ ಈ ಮುಂದಿನಂತಿದೆ:



| ಅಧಿಕಾರಿಗಳ ಪದನಾಮ | | ನಿರ್ವಹಿಸುತ್ತಿರುವ ಕರ್ತವ್ಯ: ವಿಷಯಗಳು |
|---|---|---|
| 1. | ಸರ್ಕಾರದ ಕಾರ್ಯದರ್ಶಿ (ವೈ.ಶಿ.) | ವೈ.ಶಿ. ಇಲಾಖೆಯ ಎಲ್ಲಾ ವಿಷಯಗಳು |
| 2. | ಸರ್ಕಾರದ ಉಪಕಾರ್ಯದರ್ಶಿ (ವೈ.ಶಿ.) | ವೈ.ಶಿ. ಇಲಾಖೆಯ ಎಲ್ಲಾ ವಿಷಯಗಳು |
| 3. | ಸರ್ಕಾರದ ಅಧೀನ ಕಾರ್ಯದರ್ಶಿ (ವೈ.ಶಿ.) | ವೈ.ಶಿ. ಇಲಾಖೆಯ ಎಲ್ಲಾ ವಿಷಯಗಳು |
| **ವೈದ್ಯಕೀಯ ಶಿಕ್ಷಣ ಶಾಖೆಯಲ್ಲಿನ ಕಾರ್ಯವಿಧಾನ:** | | |
| 1. | ಶಾಖಾಧಿಕಾರಿ | ಇಲಾಖೆಯ ಎಲ್ಲಾ ವಿಷಯಗಳು |
| 2. | ಹಿರಿಯ ಸಹಾಯಕರು | (ಅ) ವೈದ್ಯಕೀಯ ಶಿಕ್ಷಣ ಇಲಾಖೆಯ ಟ್ಯೂಟರ್‌ಗಳ ಉಪನ್ಯಾಸಕರುಗಳ ಸಹಾಯಕ ಪ್ರಾಧ್ಯಾಪಕರುಗಳ ಅಸೋಸಿಯೇಟ್ ಪ್ರೊಫೆಸರ್‌ಗಳ, ಪ್ರಾಧ್ಯಾಪಕರುಗಳ ಪ್ರಾಂಶುಪಾಲರುಗಳ ಮತ್ತು ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯದ ಸೇವಾ ಮತ್ತು ಶಿಸ್ತು ವಿಷಯಗಳು. |
| 3. | ಸಹಾಯಕರು (1) | (ಅ) ವೈದ್ಯಕೀಯ ದಂತ, ನರ್ಸಿಂಗ್ ಮತ್ತು ಫಿಜಿಯೋಥೆರಪಿ ಕಾಲೇಜಿನ ಎಲ್ಲಾ ವಿಷಯಗಳು<br>(ಆ) 1999ರ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳ ಪಾರದರ್ಶಕತೆ ಅಧಿನಿಯಮ ಮತ್ತು ಅದರಡಿ ರಚಿತವಾದ ನಿಯಮಾವಳಿಗೆ ಹಾಗೂ ಸ್ಥಾಯಿ ಆದೇಶಗಳಿಗೆ ಸಂಬಂಧಿಸಿದ ವಿಷಯಗಳು<br>(ಇ) ವೈದ್ಯಕೀಯ ಶಿಕ್ಷಣ ಇಲಾಖೆಯ ಸೇವಾ ವಿಷಯವನ್ನು ಹೊರತುಪಡಿಸಿ ಇತರೆ ಎಲ್ಲಾ ವಿಷಯಗಳು<br>(ಈ) ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯದ ವಿಷಯಗಳು.<br>(ಉ) ಅಧಿಕಾರಯುಕ್ತ ಸಮಿತಿಯ ವಿಷಯಗಳು |
| 4. | ಸಹಾಯಕ (2) | (ಅ) ನರ್ಸಿಂಗ್ ಶಾಲೆಗೆ ಸಂಬಂಧಿಸಿದ ವಿಷಯಗಳು<br>(ಆ) ಅರೆವೈದ್ಯಕೀಯ ಸಂಸ್ಥೆಗಳ: ಕೋರ್ಸ್‌ಗಳ ವಿಷಯಗಳು:<br>(ಇ) ಇತರೆ ಎಲ್ಲಾ ಮಿಸಲೇನಿಯಸ್ ವಿಷಯಗಳು. |
| 5. | ಕಿರಿಯ ಸಹಾಯಕರು | (ಅ) ಶಾಖೆಗೆ ಬರುವ ಪತ್ರಗಳನ್ನು ಸ್ವೀಕರಿಸುವುದು<br>(ಆ) ಶಾಖೆಯಿಂದ ಕಳುಹಿಸುವ ಎಲ್ಲಾ ಪತ್ರಗಳನ್ನು ರವಾನಿಸುವುದು.<br>(ಇ) ಕಡತಗಳ ಚಲನವಲನ<br>(ಈ) ಹಿರಿಯ ಅಧಿಕಾರಿಗಳು ವಹಿಸುವ ಇನ್ನಿತರ ವಿಷಯಗಳು. |

ಈ ಅಧಿನಿಯಮದ ಪ್ರಕಾರ ಮಾಹಿತಿ ಪಡೆಯಲು ಇಚ್ಛಿಸುವವರು ಮೇಲ್ಕಂಡ ಪ್ರಾಧಿಕಾರಿಗಳಲ್ಲಿ ನಿಯಮಾನುಸಾರ ಅರ್ಜಿ ಸಲ್ಲಿಸಿ ಮಾಹಿತಿ ಪಡೆಯಬಹುದಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿದ್ದಯ್ಯ**
ಸರ್ಕಾರದ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ).

ಪಿ.ಆರ್. 395

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಕೃತೋಇ 19 ಕೃಇಮಂ 2004, ಬೆಂಗಳೂರು, ದಿನಾಂಕ: 24ನೇ ಜೂನ್, 2004**

ಕರ್ನಾಟಕ ಆಗ್ರೋ ಇಂಡಸ್ಟ್ರೀಸ್ ಕಾರ್ಪೋರೇಷನ್ ಲಿಮಿಟೆಡ್‌ನ ಅಂತರ ನಿಯಮಾವಳಿ (ಆರ್ಟಿಕಲ್ಸ್ ಆಫ್ ಅಸೋಸಿಯೇಷನ್) ಅನುಚ್ಛೇದ 6 (ಎ) (i) (iii) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರು, ಇವರನ್ನು ಕರ್ನಾಟಕ ಆಗ್ರೋ ಇಂಡಸ್ಟ್ರೀಸ್ ಕಾರ್ಪೋರೇಷನ್ ಲಿಮಿಟೆಡ್‌ನ ನಿರ್ದೇಶಕರ ಮಂಡಳಿಯ ನಿರ್ದೇಶಕರು ಹಾಗೂ ಅಧ್ಯಕ್ಷರನ್ನಾಗಿ ತಕ್ಷಣದಿಂದಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ದೇಸಾಯಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕೃಷಿ ಮತ್ತು ತೋಟಗಾರಿಕೆ ಇಲಾಖೆ.

ಪಿ.ಆರ್. 409

**ಅಧಿಸೂಚನೆ**

**ಸಂಖ್ಯೆ: ಕೃತೋಇ 19 ಕೃಇಮಂ 2004, ಬೆಂಗಳೂರು, ದಿನಾಂಕ: 24ನೇ ಜೂನ್, 2004**

ಕರ್ನಾಟಕ ರಾಜ್ಯ ಕೃಷಿ ಉತ್ಪನ್ನಗಳ ಸಂಸ್ಕರಣೆ ಮತ್ತು ರಫ್ತು ನಿಗಮ ನಿಯಮಿತದ ಅಂತರ ನಿಯಮಾವಳಿಯ (ಆರ್ಟಿಕಲ್ಸ್ ಆಫ್ ಅಸೋಸಿಯೇಷನ್) ಅನುಚ್ಛೇದ 14(2) (ಎ) (ii)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಕಾರ್ಯದರ್ಶಿ (ಆಹಾರ ಸಂಸ್ಕರಣೆ ಮತ್ತು ಕಟಾವು ತಂತ್ರಜ್ಞಾನ), ಕೃಷಿ ಮತ್ತು ತೋಟಗಾರಿಕೆ ಇಲಾಖೆ, ಇವರನ್ನು ಕರ್ನಾಟಕ ರಾಜ್ಯ ಕೃಷಿ ಉತ್ಪನ್ನಗಳ ಸಂಸ್ಕರಣೆ ಮತ್ತು ರಫ್ತು ನಿಗಮ ನಿಯಮಿತದ ನಿರ್ದೇಶಕರ ಮಂಡಳಿಯ ನಿರ್ದೇಶಕರು ಹಾಗೂ ಅಧ್ಯಕ್ಷರನ್ನಾಗಿ ತಕ್ಷಣದಿಂದಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ದೇಸಾಯಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕೃಷಿ ಮತ್ತು ತೋಟಗಾರಿಕೆ ಇಲಾಖೆ.

ಪಿ.ಆರ್. 410

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಂಇ 175 ಮುನೋಮು 2004, ಬೆಂಗಳೂರು, ದಿನಾಂಕ: 17ನೇ ಜೂನ್, 2004**

ನೋಂದಣಿ ಮತ್ತು ಮುದ್ರಾಂಕ ಕಾಯ್ದೆ 1957ರ (1957ರ ಕರ್ನಾಟಕ ಕಾಯ್ದೆ-34) ಕಲಂ 9(1) ಬಿ ರೊಂದಿಗೆ, ಕರ್ನಾಟಕ ಮುದ್ರಾಂಕ ನಿಯಮಗಳು 1958ರ ನಿಯಮ 11-ಎ (3)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಮೆ: ಸುಪ್ರಜಿತ್ ಇಂಜಿನಿಯರಿಂಗ್ ಲಿಮಿಟೆಡ್ ಇವರು ಒಟ್ಟು 3,00,05,000 ರೂಪಾಯಿಗಳ ಮೌಲ್ಯದ ಷೇರುಗಳನ್ನು ವಿತರಿಸಲು ತಗಲುವ ಸಂಚಿತ ಮುದ್ರಾಂಕ ಶುಲ್ಕವನ್ನು ದಿನಾಂಕ: 26.03.2004ರಂದು ಒಟ್ಟು 30,005 (ಮೂವತ್ತು ಸಾವಿರದ ಐದು ರೂಪಾಯಿಗಳನ್ನು ಮಾತ್ರ) ರೂಪಾಯಿಗಳನ್ನು ಸಂದಾಯಿಸಿರುತ್ತಾರೆಂದು ಕರ್ನಾಟಕ ಸರ್ಕಾರವು ಪ್ರಕಟಿಸುತ್ತದೆ.

"ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 1 ಮುನೋಮು 2003, ದಿನಾಂಕ: 22.04.2003ರ ಪ್ರಕಾರ ಸಂಚಿತ ಮುದ್ರಾಂಕ ಶುಲ್ಕವನ್ನು ಮೊದಲಬಾರಿಗೆ ಸಂದಾಯಿಸಲಾಗಿದೆ." ಎಂಬ ಪದಗಳನ್ನು ಷೇರು ಪತ್ರಗಳ ಮೇಲೆ ಮುದ್ರಿಸಿ ಬಿಡುಗಡೆ ಮಾಡಲು ಸರ್ಕಾರವು ಅನುಮತಿ ನೀಡಿದೆ.

ಕರ್ನಾಟಕ ಮುದ್ರಾಂಕ ನಿಯಮಾವಳಿಗಳ ನಿಯಮ 11-ಎ (3)ರ ಪ್ರಕಾರ ಸದರಿ ಸಂಸ್ಥೆಯು ವರ್ಗಾಯಿಸಿದ ನಿರ್ದಿಷ್ಟ ಸಂಖ್ಯೆಯ ಷೇರುಗಳ ವರದಿಯನ್ನು ಸರ್ಕಾರಕ್ಕೆ ತಪ್ಪದೇ ಕಳುಹಿಸತಕ್ಕದ್ದು. ಹಾಗೂ ಕರ್ನಾಟಕ ಮುದ್ರಾಂಕ ನಿಯಮಾವಳಿಯಲ್ಲಿನ ನಿಯಮ 11-ಎ (4)ರ ಪ್ರಕಾರ ಸರ್ಕಾರದ ಸಂಬಂಧಪಟ್ಟ ಅಧಿಕಾರಿಗಳು ಷೇರುಗಳ ವಿತರಣೆಗೆ ಸಂಬಂಧಿಸಿದಂತೆ ನಿರ್ವಹಿಸಲಾದ ರಿಜಿಸ್ಟರ್ ಪುಸ್ತಕ, ದಾಖಲೆಗಳನ್ನು ಪರಿಶೀಲಿಸಲು ಮತ್ತು ತಪಾಸಣೆ ನಡೆಸಲು ಸದರಿ ಸಂಸ್ಥೆಯು ಅವಕಾಶ ನೀಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಡಿ.ಎನ್. ಶ್ರೀಮುಖಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

ಪಿ.ಆರ್. 404

**ಸಾರಿಗೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಾರಿಇ 09 ಸಾಸುಮಾ 2004 (ಭಾಗ), ಬೆಂಗಳೂರು, ದಿನಾಂಕ: 19ನೇ ಜೂನ್, 2004**

ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಟಿಡಿ 68 ಟಿಆರ್‌ವಿ 2001, ದಿನಾಂಕ: 02.01.2004ರಲ್ಲಿ ಕರ್ನಾಟಕದಲ್ಲಿ ಚಾಲನೆಯಲ್ಲಿರುವ ಎಲ್ಲಾ ಆಟೋರಿಕ್ಷಾಗಳಿಗೆ ಎಲ್.ಪಿ.ಜಿ. ಕಿಟ್ ಅಳವಡಿಸುವ ಹಿನ್ನಲೆಯಲ್ಲಿ ಮೋಟಾರು ವಾಹನ ಕಾಯ್ದೆ 1988 (ಕೇಂದ್ರದ ಕಾಯ್ದೆ 1959) ಉಪ ಪ್ರಕರಣದ 88ರಡಿಯಲ್ಲಿ ಪರಿಶೀಲಿಸಿ, ವಿವಿಧ ಅವಧಿಯಲ್ಲಿ ನೋಂದಣಿಯಾದ ಆಟೋರಿಕ್ಷಾಗಳಿಗೆ ಎಲ್.ಪಿ.ಜಿ. ಅಳವಡಿಸಲು ಕಡೆಯ ದಿನಾಂಕವನ್ನು ಸೂಚಿಸಿ ಅಧಿಸೂಚನೆ ಹೊರಡಿಸಲಾಗಿದೆ, ಆಟೋರಿಕ್ಷಾ ಚಾಲಕರ ಸಂಘದವರು ಸಾರಿಗೆ ಆಯುಕ್ತರವರಿಗೆ ಮಾಡಿರುವ ಮನವಿಯ ಮೇಲೆ ಪರಿಶೀಲಿಸಿ, ಸಾರಿಗೆ ಆಯುಕ್ತರು ಪ್ರಸ್ತಾಪಿಸಿರುವಂತೆ, ದಿನಾಂಕ:02.01.2004ರಂದು ಹೊರಡಿಸಲಾದ ಹೆಚ್‌ಟಿಡಿ 68 ಟಿಆರ್‌ವಿ 2001ರಲ್ಲಿ ವಿವಿಧ ಅವಧಿಯ ಆಟೋರಿಕ್ಷಾಗಳಿಗೆ ಗುರುತಿಸಲಾದ ಗರಿಷ್ಠ ಅವಧಿಯನ್ನು ಈ ಅಧಿಸೂಚನೆ ಹೊರಡಿಸಿದ ದಿನಾಂಕದಿಂದ ಮತ್ತೆ ಮೂರು ತಿಂಗಳ ಅವಧಿಗೆ ವಿಸ್ತರಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಲಕ್ಷ್ಮೀಕಾಂತ**
ಸರ್ಕಾರದ ಅಧೀನ ಕಾರ್ಯದರ್ಶಿ, ಸಾರಿಗೆ ಇಲಾಖೆ.

ಪಿ.ಆರ್. 406

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ
## ಅಧಿಸೂಚನೆ

**ಸಂಖ್ಯೆ: ಕೃತೋಇ 19 ಕೃಇಮಂ 2004, ಬೆಂಗಳೂರು, ದಿನಾಂಕ: 24ನೇ ಜೂನ್, 2004**

ಸರ್ಕಾರದ ಅಧಿಸೂಚನೆ ಸಂಖ್ಯೆ: ಕೃತೋಇ 76 ಕೃಇಮಂ 2002, ದಿನಾಂಕ: 30.12.2002 ಮತ್ತು ಅಧಿಸೂಚನೆ ಸಂಖ್ಯೆ: ಕೃತೋಇ 75 ಕೃಇಮಂ 2002 (ಭಾಗ) ದಿನಾಂಕ:02.01.2003ರಲ್ಲಿ ನೇಮಕ ಮಾಡಿದ ಈ ಕೆಳಕಂಡ ಅಧ್ಯಕ್ಷರು ಹಾಗೂ ನಿರ್ದೇಶಕರುಗಳನ್ನು ಕರ್ನಾಟಕ ಆಗ್ರೋ ಇಂಡಸ್ಟ್ರೀಸ್ ಕಾರ್ಪೊರೇಷನ್ ಲಿಮಿಟೆಡ್‌ನ ಅಂತರ ನಿಯಮಾವಳಿ (ಆರ್ಟಿಕಲ್ಸ್ ಆಫ್ ಅಸೋಸಿಯೇಷನ್) ಅನುಚ್ಛೇದನ (6) (ಎ) (v) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಕರ್ನಾಟಕ ಆಗ್ರೋ ಇಂಡಸ್ಟ್ರೀಸ್‌ನ ಕಾರ್ಪೊರೇಶನ್ ಅಧ್ಯಕ್ಷರು ಹಾಗೂ ನಿರ್ದೇಶಕರುಗಳ ನೇಮಕಾತಿಯನ್ನು ಈ ತಕ್ಷಣದಿಂದಲೇ ಜಾರಿಗೆ ಬರುವಂತೆ ರದ್ದುಗೊಳಿಸಿದೆ.

| | ಶ್ರೀಯುತರು | |
|---|---|---|
| 1) | ಬೇಗಾನೆ ರಾಮಯ್ಯ | ಅಧ್ಯಕ್ಷರು |
| 2) | ವಿಜಯಕುಮಾರ್ ಕೂಬಾ,<br>ಬೊಸಗ ಗ್ರಾಮ, ಬಸವಕಲ್ಯಾಣ ತಾಲ್ಲೂಕು, ಬೀದರ್ ಜಿಲ್ಲೆ, | ನಿರ್ದೇಶಕರು |
| 3) | ಆರ್. ಅಶೋಕ್ ಕುಮಾರ್<br>ನಂ. ಸಿ. 68, ಬ್ಯಾಂಕ್ ಕಾಲೋನಿ, ವಿ.ವಿ. ಪುರಂ ಎಕ್ಸ್‌ಟೆನ್‌ಷನ್ ಗೌರಿಬಿದನೂರು. | ನಿರ್ದೇಶಕರು |
| 4) | ಕಬೀರ್ ಅಹಮದ್ ಬಿನ್<br>ಬಿ.ಬಿ. ಅಬ್ದುಲ್ಲಾ, ಬೆಸಗರ ಹಳ್ಳಿ, ಮದ್ದೂರು ತಾಲ್ಲೂಕು ಮಂಡ್ಯ ಜಿಲ್ಲೆ. | ನಿರ್ದೇಶಕರು |
| 5) | ರಂಗೇಗೌಡ<br>ಚನ್ನರಾಯಪಟ್ಟಣ | ನಿರ್ದೇಶಕರು |
| 6) | ಪದ್ಮನಾಭ ಶೆಟ್ಟಿ<br>ಚೇಳೂರು ಗ್ರಾಮ, ಗುಬ್ಬಿ ತಾಲ್ಲೂಕು ತುಮಕೂರು ಜಿಲ್ಲೆ. | ನಿರ್ದೇಶಕರು |
| 7) | ಸದಾನಂದ ಪಾಮದಿನಿ,<br>ಎನ್.ಎಂ. ರಸ್ತೆ, ಚಿಕ್ಕೋಡಿ, ಬೆಳಗಾಂ ಜಿಲ್ಲೆ. | ನಿರ್ದೇಶಕರು |
| 8) | ಚನ್ನಪ್ಪ ಗುರುಲಿಂಗಪ್ಪ ಮುತ್ನಾಳ್<br>ಎಂ. ಕೆ. ಹುಬ್ಬಿ, ಬೈಲಹೊಂಗಲ ತಾಲ್ಲೂಕು, ಬೆಳಗಾಂ ಜಿಲ್ಲೆ. | ನಿರ್ದೇಶಕರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ದೇಸಾಯಿ**
ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ.

ಪಿ.ಆರ್. 413

## ಅಧಿಸೂಚನೆ

**ಸಂಖ್ಯೆ: ಕೃತೋಇ 19 ಕೃಇಮಂ 2004, ಬೆಂಗಳೂರು, ದಿನಾಂಕ: 24ನೇ ಜೂನ್, 2004**

ಸರ್ಕಾರದ ಅಧಿಸೂಚನೆ ಸಂಖ್ಯೆ: ಕೃತೋಇ 74 ಕೃಇಮಂ 2002, ದಿನಾಂಕ: 28.12.2002 ಮತ್ತು ಕೃತೋಇ 75 ಕೃಇಮಂ 2002, ದಿನಾಂಕ:23.01.2003ರಲ್ಲಿ ನೇಮಕ ಮಾಡಿದ ಈ ಕೆಳಕಂಡ ಅಧ್ಯಕ್ಷರು ಹಾಗೂ ನಿರ್ದೇಶಕರುಗಳನ್ನು ಕರ್ನಾಟಕ ಆಗ್ರೋ ಕಾರನ್ ಪ್ರಾಡಕ್ಟ್ಸ್ ಲಿಮಿಟೆಡ್‌ನ ಅಂತರ ನಿಯಮಾವಳಿ (ಆರ್ಟಿಕಲ್ಸ್ ಆಫ್ ಅಸೋಸಿಯೇಷನ್) ಅನುಚ್ಛೇದ 5(ಬಿ) (iv) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಕರ್ನಾಟಕ ಆಗ್ರೋ ಕಾರನ್ ಪ್ರಾಡಕ್ಟ್ಸ್ ಲಿಮಿಟೆಡ್‌ನ ಅಧ್ಯಕ್ಷರು ಹಾಗೂ ನಿರ್ದೇಶಕರುಗಳ ನೇಮಕಾತಿಯನ್ನು ಈ ತಕ್ಷಣದಿಂದಲೇ ಜಾರಿಗೆ ಬರುವಂತೆ ರದ್ದುಗೊಳಿಸಿದೆ.

| | ಶ್ರೀಯುತರು | |
|---|---|---|
| 1) | ಶ್ರೀ ಶಿವಕುಮಾರ್ ಜಿ. ಗುಂಡೆಗಿ,<br>ಮಾತೃ ಛಾಯ, ಬಿಎಲ್‌ಡಿಇ ರಸ್ತೆ, ಬಿಜಾಪುರ. | ಅಧ್ಯಕ್ಷರು |
| 2) | ಶ್ರೀ ಸಂಪತ್ ಸಾಮ್ರಾಜ್ಯ ಎಸ್.ಡಿ.<br>ಶಿರತಾಡಿ ಅಂಚೆ, ಶಿಮುಂಜೆ ಗುತ್ತು, ಮಂಗಳೂರು ತಾಲ್ಲೂಕು ದಕ್ಷಿಣ ಕನ್ನಡ ಜಿಲ್ಲೆ. | ನಿರ್ದೇಶಕರು |
| 3) | ಶ್ರೀ ಕೆ. ಜಾತಪ್ಪ<br>ಮಾಜಿ ಮುನಿಸಿಪಲ್ ಪ್ರೆಸಿಡೆಂಟ್ ಕೊಟ್ಟೂರು, ಬಳ್ಳಾರಿ ಜಿಲ್ಲೆ. | ನಿರ್ದೇಶಕರು |
| 4) | ಶ್ರೀ ವಿಷ್ಣುಕಾಂತ್ ಹನುಮಂತಪ್ಪ ಜಾಧವ್,<br>ಕೊಪ್ಪರಸಿ ಕೊಪ್ಪ, ಹಾನಗಲ್ ತಾಲ್ಲೂಕು, ಹಾವೇರಿ ಜಿಲ್ಲೆ. | ನಿರ್ದೇಶಕರು |
| 5) | ಶ್ರೀ ಜಿ.ಡಿ. ಚಿಕ್ಕರಂಗಪ್ಪ,<br>ಗುಟ್ಟೆ, ಜಕ್ಕನಹಳ್ಳಿ ಅಂಚೆ, ಮಧುಗಿರಿ ತಾ: ತುಮಕೂರು. | ನಿರ್ದೇಶಕರು |
| 6) | ಶ್ರೀ ಅಮಾನುಲ್ಲಾ<br>ಬ್ಲಾಕ್ ಕಾಂಗ್ರೆಸ್ ಅಧ್ಯಕ್ಷರು, ಚನ್ನಗಿರಿ, ಕೌಸರ್ ಮಸೀದಿ ವೃತ್ತ, ದಾವಣಗೆರೆ ಜಿಲ್ಲೆ. | ನಿರ್ದೇಶಕರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ದೇಸಾಯಿ**
ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ.

ಪಿ.ಆರ್. 412